ಗಣಿ ಶಾಖೆ



ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 1413 |
| ಸದಸ್ಯರ ಹೆಸರು | ಶ್ರೀ ಗೋವಿಂದ ರಾಜು<br>(ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | 16.03.2021 |
| ಉತ್ತರಿಸುವ ಸಚಿವರು | ಗಣಿ ಮತ್ತು ಭೂವಿಜ್ಞಾನ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕೋಲಾರ ಹಾಗೂ ಚಿಕ್ಕಬಳ್ಳಾಪುರ ಜಿಲ್ಲೆಯಲ್ಲಿ ನೂರಾರು ವರ್ಷಗಳಿಂದ ಕಲ್ಲುಕುಟುಕರು (ಭೋವಿ ಜನಾಂಗ) ಈ ಪ್ರದೇಶದಲ್ಲಿರುವ ಬಂಡೆ ಕಲ್ಲುಗಳಿಂದ ಸೈಜು ಹಾಗೂ ಚಪ್ಪಡಿ ಕಲ್ಲುಗಳನ್ನು ಹೊಡೆದು ಜೀವನ ನಡೆಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿರುತ್ತದೆ. |
| ಆ) | ಹಾಗಿದ್ದಲ್ಲಿ, ಇತ್ತೀಚಿನ ದಿನಗಳಲ್ಲಿ ಕಲ್ಲು ಗಣಿಗಾರಿಕೆಯಲ್ಲಿ ನಡೆಯುತ್ತಿರುವ ಅಹಿತಕರ ಘಟನೆಗಳಿಂದ ಇಲಾಖೆಯವರು ಕಲ್ಲು ಕುಟುಕರ ಕೆಲಸಕ್ಕೆ ತೊಂದರೆಯುಂಟು ಮಾಡುತ್ತಿರುವುದಲ್ಲದೆ ಅವರ ಕೆಲಸಕ್ಕೆ ಬಳಸುವ ಸಾಧನಗಳನ್ನು ವಶಪಡಿಸಿಕೊಳ್ಳುವುದು ಅವರ ಮೇಲೆ ಮೊಕದ್ದಮೆಗಳನ್ನು ದಾಖಲಿಸುವುದು ಹಾಗೂ ಕಲ್ಲು ತುಂಬಿದ ಲಾರಿ / ಟ್ರ್ಯಾಕ್ಟರ್‌ಗಳಿಗೆ ಸುಮಾರು ರೂ.50,000 ಗಳ ವರೆಗೆ ದಂಡ ವಿಧಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮಗಳು, 1994 ರಂತೆ ಪರವಾನಿಗೆ ಪಡೆಯದೆ ಅಕ್ರಮವಾಗಿ ಗಣಿಗಾರಿಕೆ ನಡೆಸುತ್ತಿರುವವರ ವಿರುದ್ಧ ಗಣಿ ಮತ್ತು ಖನಿಜ (ಅಭಿವೃದ್ಧಿ ಮತ್ತು ನಿಯಂತ್ರಣ) ಕಾಯ್ದೆ, 1957 ಮತ್ತು ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮಗಳು, 1994 ರಂತೆ ಮೊಕದ್ದಮೆಗಳನ್ನು ದಾಖಲಿಸಿ, ದಂಡ ವಿಧಿಸಿ ಸಂಗ್ರಹಿಸಲು ಕ್ರಮ ವಹಿಸಲಾಗಿದೆ. |

--2

| | | |
|---|---|---|
| ಇ) | ಸುಮಾರು 2 ಲಕ್ಷಗಳವರೆಗೆ ಇಂತಹ ಕುಟುಂಬಗಳು ಇದ್ದು ಅವರು ಜೀವನ ನಡೆಸುವುದು ತುಂಬಾ ಕಷ್ಟಕರವಾಗಿರುವುದರಿಂದ ಇವರ ಜೀವನೋಪಾಯಕ್ಕೆ ಸರ್ಕಾರ ಯಾವುದಾದರೂ ಯೋಜನೆಗಳನ್ನು ರೂಪಿಸಿದೆಯೇ; | ಹೌದು |
| ಈ) | ಇವರ ಜೀವನೋಪಾಯಕ್ಕೆ ರೂಪಿಸಿರುವ ಯೋಜನೆಗಳು ಯಾವುವು? (ಸಂಪೂರ್ಣ ಮಾಹಿತಿ ನೀಡುವುದು) | • ದಿನಾಂಕ 12.08.2016 ರಂದು ಕರ್ನಾಟಕ ಉಪಖನಿಜ ರಿಯಾಯಿತಿ (ತಿದ್ದುಪಡಿ) ನಿಯಮಗಳು, 2016ನ್ನು ಜಾರಿಗೊಳಿಸಿದ್ದು, ಸದರಿ ನಿಯಮಗಳ ಪ್ರಕಾರ ಸರ್ಕಾರಿ ಜಮೀನಿನಲ್ಲಿರುವ ಉಪಖನಿಜ ನಿಕ್ಷೇಪಗಳನ್ನು ತೆಗೆಯಲು ಹರಾಜು ಮೂಲಕವೇ ಗುತ್ತಿಗೆಗಳನ್ನು ಮಂಜೂರು ಮಾಡಬೇಕಾಗಿರುತ್ತದೆ.<br>• ಆದಾಗ್ಯೂ ಪರಿಶಿಷ್ಟ ಜಾತಿ / ಪಂಗಡ, ವಂಶ ಪಾರಂಪರಿಕವಾಗಿ ಕಲ್ಲು ಗಣಿಗಾರಿಕೆಯನ್ನೇ ಅವಲಂಬಿಸಿ ಜೀವನ ಸಾಗಿಸುತ್ತಿರುವ ವ್ಯಕ್ತಿಗಳು / ನೋಂದಾಯಿತ ಸಂಘ ಸಂಸ್ಥೆಗಳು ಹಾಗೂ ಆರ್ಥಿಕವಾಗಿ ಹಿಂದುಳಿದ ವರ್ಗದವರಿಗೆ ಹರಾಜು ರಹಿತವಾಗಿ ಕಲ್ಲುಗಣಿ ಗುತ್ತಿಗೆ ಮಂಜೂರು ಮಾಡಲು ನಿಯಮ 3-F ರಲ್ಲಿ ಅವಕಾಶ ಕಲ್ಪಿಸಲಾಗಿದೆ.<br>• ಅದರಂತೆ, ಹರಾಜು ಮೂಲಕ ಕಲ್ಲುಗಣಿ ಗುತ್ತಿಗೆ ಮಂಜೂರು ಮಾಡುವ ವಿಸ್ತೀರ್ಣದ ಶೇಕಡ 25 ರಷ್ಟು ಪ್ರದೇಶವನ್ನು ಈ ನಿಯಮದಡಿ ಪರಿಶಿಷ್ಟಜಾತಿ / ಪಂಗಡ, ವಂಶ ಪಾರಂಪರಿಕವಾಗಿ ಕಲ್ಲು ಗಣಿಗಾರಿಕೆಯನ್ನೇ ಅವಲಂಬಿಸಿ ಜೀವನ ಸಾಗಿಸುತ್ತಿರುವ ವ್ಯಕ್ತಿಗಳು / ನೋಂದಾಯಿತ ಸಂಘ ಸಂಸ್ಥೆಗಳಿಗೆ ಇಲಾಖೆಯಿಂದ ಬ್ಲಾಕುಗಳನ್ನು ಗುರುತಿಸಿ ಕಂದಾಯ ಮತ್ತು ಅರಣ್ಯ ಇಲಾಖೆ ನಿರಾಕ್ಷೇಪಣಾ ಪತ್ರಗಳನ್ನು ಪಡೆದು, ಕಟ್ಟಡ ಕಲ್ಲುಗಣಿ ಗುತ್ತಿಗೆ ಮಂಜೂರಾತಿ ನೀಡಲು ಅವಕಾಶ ಕಲ್ಪಿಸಲಾಗಿದೆ.<br>• **ಕೋಲಾರ ಜಿಲ್ಲೆ** ವ್ಯಾಪ್ತಿಯಲ್ಲಿ ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮಗಳು, 1994ರ ನಿಯಮ 3-F ರಂತೆ ಸಾಂಪ್ರದಾಯಿಕವಾಗಿ ಸೈಜು ಮತ್ತು ಚಪ್ಪಡಿ ಕಲ್ಲುಗಳನ್ನು ಹೊಡೆದು ಜೀವನ ನಡೆಸುತ್ತಿರುವ ಹಾಗೂ ಆರ್ಥಿಕವಾಗಿ- |

--3

| | | |
|---|---|---|
| | | -ಹಿಂದುಳಿದವರಿಗೆ ಕಟ್ಟಡ ಕಲ್ಲುಗಣಿ ಗುತ್ತಿಗೆ ಮಂಜೂರಾತಿಗೆ ಒಟ್ಟು 553-00 ಎಕರೆ ಪ್ರದೇಶದಲ್ಲಿ 163 ಬ್ಲಾಕುಗಳ ಕಟ್ಟಡ ಕಲ್ಲಿನ ನಿಕ್ಷೇಪವನ್ನು ಗುರುತಿಸಲಾಗಿದೆ.<br>• ಸದರಿ ಪ್ರದೇಶದಲ್ಲಿ ಕಲ್ಲುಗಣಿ ಗುತ್ತಿಗೆ ಮಂಜೂರಾತಿಗೆ ಕಂದಾಯ ಮತ್ತು ಅರಣ್ಯ ಇಲಾಖೆ ನಿರಾಕ್ಷೇಪಣಾ ಪತ್ರ ಕೋರಲಾಗಿದ್ದು, ಈ ಪೈಕಿ 08 ಬ್ಲಾಕುಗಳಿಗೆ ನಿರಾಕ್ಷೇಪಣಾ ಪತ್ರ ಸ್ವೀಕೃತವಾಗಿದ್ದು, ಸದರಿ ಬ್ಲಾಕುಗಳಲ್ಲಿ ಕಲ್ಲುಗಣಿ ಗುತ್ತಿಗೆ ಮಂಜೂರು ಮಾಡಲಾಗಿರುತ್ತದೆ.<br>• ಉಳಿದ ಬ್ಲಾಕುಗಳಿಗೆ ಕಂದಾಯ ಮತ್ತು ಅರಣ್ಯ ಇಲಾಖೆ ನಿರಾಕ್ಷೇಪಣಾ ಪತ್ರಗಳು ಸ್ವೀಕೃತವಾಗಿರುವುದಿಲ್ಲ. ಸದರಿ ದಾಖಲೆಗಳನ್ನು ಪಡೆದು ಕಲ್ಲುಗಣಿ ಗುತ್ತಿಗೆ ಮಂಜೂರಾತಿಗೆ ಕ್ರಮವಹಿಸಲಾಗುತ್ತದೆ.<br>• **ಚಿಕ್ಕಬಳ್ಳಾಪುರ ಜಿಲ್ಲೆಯಲ್ಲಿ** ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮಗಳು, 1994ರ ನಿಯಮ 3-F ರಂತೆ ಸಾಂಪ್ರದಾಯಿಕವಾಗಿ ಸೈಜು ಮತ್ತು ಚಪ್ಪಡಿ ಕಲ್ಲುಗಳನ್ನು ಹೊಡೆದು ಜೀವನ ನಡೆಸುತ್ತಿರುವ ಹಾಗೂ ಆರ್ಥಿಕವಾಗಿ ಹಿಂದುಳಿದವರಿಗೆ ಕಟ್ಟಡ ಕಲ್ಲುಗಣಿ ಗುತ್ತಿಗೆ ಮಂಜೂರಾತಿಗೆ ಕಟ್ಟಡ ಕಲ್ಲಿನ ನಿಕ್ಷೇಪದ ಬ್ಲಾಕುಗಳನ್ನು ಗುರುತಿಸುವ ಪ್ರಕ್ರಿಯೆ ಚಾಲ್ತಿಯಲ್ಲಿರುತ್ತದೆ. |

ಸಂಖ್ಯೆ ಸಿಐ 170 ಎಂಎಂಎನ್ 2021

(ಮುರುಗೇಶ್ ಆರ್. ನಿರಾಣಿ)
ಗಣಿ ಮತ್ತು ಭೂವಿಜ್ಞಾನ ಸಚಿವರು.